ಬಂಧಿಸಿದ್ದಾರೆ. ಹಾಗೇ ಎಲ್ಲರ ಹೃದಯದಲ್ಲೂ ಶಾಶ್ವತ ನೆಲೆಸಿದ್ದಾರೆ. ಇವರಿಗೆ ರವೀಂದ್ರ ಪುರಸ್ಕಾರ ಸಹ ಲಭಿಸಿದೆ.

*ಸೈಯದ್ ಮುಸ್ತಾಫಾ ಸಿರಾಜ್ (1930):* ಸ್ವಾತಂತ್ರ್ಯಾನಂತರದ ಕಾಲದ ತರುಣ ಲೇಖಕರಲ್ಲಿ ಸೈಯಾದ್ ಮುಸ್ತಾಫಾ ಸಿರಾಜ್ ಒಂದು ಪ್ರಮುಖ ಹೆಸರು. ಇವರ ಜೀವನದ ಅನುಭವಗಳು ವಿಚಿತ್ರವಾಗಿವೆ. ಇವರು ಮುರ್ಶಿದಾಬಾದ್‌ನ ಒಂದು ಸುತ್ತಾಡುವ ದಳದ ಹಾಡುವ 'ಮಾಸ್ತರ್'ರಾಗಿದ್ದಾರು. ಇದು 1950–58ರ ವಿಷಯ. 1949–50ರ ತನಕ ಇವರು ಪತ್ರಕಾರರಾಗಿದ್ದರು. ಆಗ ಇವರು ಕಲ್ಕತ್ತೆಯ ಒಂದು ಪ್ರಖ್ಯಾತ ದಿನಪತ್ರಿಕೆಯೊಡನೆ ಸಂಬಂಧ ಇರಿಸಿಕೊಂಡಿದ್ದರು. ತಾರಾಶಂಕರರ ದಾರಿಯಲ್ಲೇ ನಡೆದು ತಮ್ಮದೇ ಆದ ದಾರಿಯನ್ನು ಕಂಡುಕೊಂಡಿರುವ ಇವರ ಪ್ರಥಮ ಕಥೆ ಭಾಲೊ ಟಾಶಾ ಓ ಡಾವುನ್ ಟ್ರೈನ್' 'ದೇಶ್' ಪತ್ರಿಕೆಯಲ್ಲಿ ಪ್ರಕಟಗೊಂಡಿತ್ತು. ಬರವಣಿಗೆಯೇ ಇವರ ಜೀವನದ ಮುಖ್ಯ ಮಾರ್ಗ. ಇವರು ಬಂಗಾಳದ ಗ್ರಾಮೀಣ ಜೀವನಕ್ಕೆ ಏನು ಪ್ರಾಮುಖ್ಯತೆ ನೀಡಿದ್ದಾರೆ ಅದೇ ಪ್ರಾಮುಖ್ಯತೆಯನ್ನು ನಗರ ಜೀವನ ಚಿತ್ರಣಕ್ಕೂ ನೀಡಿದ್ದಾರೆ. ಇವರು ಬರೆಯುವುದೂ ಹೆಚ್ಚು. ಸಮಾಜದ ಬಗ್ಗೆ ಹೆಚ್ಚು ಕಾಳಜಿ ಇರುವ ಲೇಖಕರೆಂದು ಪರಿಗಣಿಸಲ್ಪಟ್ಟಿದ್ದಾರೆ.

*ಮತಿ ನಂದಿ (1932):* ಉತ್ತರ ಕಲ್ಕತ್ತಾದ ಒಂದು ಗೌರವಸ್ಥ ಕುಟುಂಬದಲ್ಲಿ ಜನ್ಮ ತಾಳಿದ ಇವರು ಆಟೋಮೊಬೈಲ್ ಇಂಜಿನಿಯರಿಂಗ್‌ನಲ್ಲಿ ಡಿಪ್ಲೊಮಾ ಪಡೆದಿದ್ದರು. ರಾಜ್ಯ ಸಾರಿಗೆ ಇಲಾಖೆಯಲ್ಲಿ ಎರಡು ವರ್ಷ ದುಡಿದು ಅನಂತರ ಬಿ.ಎ. ಪಾಸು ಮಾಡಿಕೊಂಡು ಪತ್ರಕಾರರಾದರು. ಕ್ರಿಕೆಟ್ ಆಟದ ಭಕ್ತರಿದ್ದು, ಕ್ರಿಕೆಟ್ ಕುರಿತೇ ಮೂರು ಪುಸ್ತಕಗಳನ್ನು ರಚಿಸಿದ್ದಾರೆ. 1956ರಲ್ಲಿ 'ದೇಶ್' ಪತ್ರಿಕೆಯಲ್ಲಿ 'ಛತ್' ಹೆಸರಿನ ಕಥೆ ಬರೆದು ಎಲ್ಲರ ಗಮನವನ್ನು ತನ್ನತ್ತ ಸೆಳೆದರು. ಇವರ ಬರಹದ ಶೈಲಿಯಲ್ಲಿ ದೃಢತೆ ಇದೆ. ವೃಥಾ ಕಿಂಚಿತ್ತೂ ಹೇಳರು. ಕಠೋರ ವಾಸ್ತವಿಕತೆಯ ನೆಲದ ಮೇಲೆ ನಿಂತು ಮನುಷ್ಯನ ಬಗ್ಗೆ ವಿಶ್ವಾಸ ಇಡುವ ಇವರು ಮಧ್ಯಮ ಹಾಗೂ ನಿಮ್ನವರ್ಗದವರ ಬಗ್ಗೆ ಬರೆಯುವುದರಲ್ಲಿ ನಿಪುಣರು.

*ಸುನೀಲ್ ಗಂಗೋಪಾಧ್ಯಾಯ (1934):* ಸುನೀಲ್ ಗಂಗೋಪಾಧ್ಯಾಯರು ಫರೀದ್‌ಪುರದಲ್ಲಿ ಜನಿಸಿದರು. ಇವರು ಕವಿ ಹಾಗೂ ಕಥೆಗಾರರು. 'ದೇಶ್' ಪತ್ರಿಕೆಯಲ್ಲಿ ಪ್ರಕಟಗೊಂಡಿದ್ದ ಇವರ ಕವಿತೆ 'ಏಕಟಿ ಕವಿತಾ' ದಿಂದ ಇವರು ಪ್ರಸಿದ್ಧಗೊಂಡರು. ಇವರು ಕವಿ ಸುನೀಲ್‌ರಾಗಿ ಅಥವಾ ಕಥೆಗಾರ ಸುನೀಲ್‌ರಾಗಿ ಹೆಚ್ಚು ಪ್ರಖ್ಯಾತರಾಗಿದ್ದಾರೋ, ಹೇಳುವುದು ಕಷ್ಟ. ಹಲವಾರು ವಿಧದ ನೌಕರಿಗಳನ್ನು ಮಾಡಿರುವ ಇವರು ಈಗ ಕಲ್ಕತ್ತಾದ ಒಂದು ದಿನಪತ್ರಿಕೆಯನ್ನು ಸೇರಿದ್ದಾರೆ. 1980ರಲ್ಲಿ ಅಮೇರಿಕಾ ಪ್ರವಾಸ ಮಾಡಿ ಬಂದಿರುವ ಇವರು ಬರೆದಿರುವುದು ಬಹಳ. ಇವರ ಅನೇಕ ಕಾದಂಬರಿಗಳು ಚಲನಚಿತ್ರಗಳಾಗಿವೆ. ಇವರು ತಮ್ಮ ಕಥೆಗಳಲ್ಲಿ ಮಧ್ಯಮವರ್ಗದ ಜೀವನದ ವಿವಿಧ ಮುಖಗಳನ್ನು ಜೀವಂತವಾಗಿ ಚಿತ್ರಿಸಿದ್ದಾರೆ. ಭಾಷೆಯಲ್ಲಿ ಲಾಲಿತ್ಯ ತುಂಬಿದೆ. ವಸ್ತುವಿನ ಆಯ್ಕೆ, ನಿರೂಪಣೆ, ಹಾಗೂ

ಜೀವಂತಶೈಲಿ ಇವರನ್ನು ಜನಪ್ರಿಯಗೊಳಿಸಿದೆ.

***ಪ್ರಫುಲ್ಲರಾಯ್*** *(1934):* ಪ್ರಫುಲ್ಲರಾಯ್ ಢಾಕಾದಲ್ಲಿ ಜನಿಸಿದರು. ಮನುಷ್ಯನ ಬಿಸಿ ಜೀವನದ ಬಗ್ಗೆ ಹೆಚ್ಚಿನ ಸಂಖ್ಯೆಯಲ್ಲಿ ಕಾದಂಬರಿಗಳನ್ನು ಬರೆಯುವ ಮೂಲಕವೇ ಇವರು ಸಾಹಿತ್ಯ ಜೀವನ ಪ್ರಾರಂಭಿಸಿದರು. 'ದೇಶ್' ಪತ್ರಿಕೆಯಲ್ಲಿ ಪ್ರಕಟಗೊಂಡ 'ಪೂರ್ವ ಪಾವಂತ್ಯ' ಕಾದಂಬರಿ ಮೂಲಕವೇ ಇವರು ಸಾಹಿತ್ಯ ಪ್ರಪಂಚದಲ್ಲಿ ಪ್ರತಿಷ್ಠಾಪಿತಗೊಂಡರು. ಎರಡು ಭಾಗಗಳಲ್ಲಿ ಪ್ರಕಟಗೊಂಡಿರುವ ಇವರ ಬೃಹತ್ ಕಾದಂಬರಿ 'ಕೆಯಾಪಾತರ್ ನೌಕಾ' ಈ ಯುಗದ ಬಂಗಾಳ ಸಾಹಿತ್ಯದ ಚರಿತ್ರೆಯಾಗಿದೆ. ಈ ದಿನಗಳಲ್ಲಿ ಇವರು ಕಲ್ಕತ್ತೆಯ ಒಂದು ದೈನಿಕ ಪತ್ರಿಕೆಯ ವಿಭಾಗೀಯ ಸಂಪಾದಕರಾಗಿದ್ದಾರೆ. ಇವರ ಕಾದಂಬರಿಗಳನ್ನು ಅವಲಂಬಿಸಿ ಹಲವು ಚಲನಚಿತ್ರಗಳಾಗಿವೆ. ಕಥೆ ಹೆಣೆಯುವುದರಲ್ಲಿ ಹಾಗೂ ಚಲನಚಿತ್ರದಲ್ಲಿ ಇವರಿಗೆ ಸಮಾನ ನಿಪುಣತೆ ಇದೆ.

***ಶೀರ್ಷೇಂದು ಮುಖೋಪಾಧ್ಯಾಯ*** *(1935):* ಇವರು ಜನಿಸಿದ್ದು ಮೈಮನ್ ಸಿಂಹ (ಬಂಗಾಳ ದೇಶ)ದಲ್ಲಿ. 1959ರಲ್ಲಿ ಇವರು ಶಿಕ್ಷಕ ವೃತ್ತಿ ಪ್ರಾರಂಭಿಸಿದರು. 'ದೇಶ್' ಪತ್ರಿಕೆಯಲ್ಲಿ ಪ್ರಕಟಗೊಂಡ 'ಜಲತರಂಗ್' ಕಥೆಯಿಂದಲೇ ಇವರು ಲೇಖಕರಾಗಿ ಪ್ರತಿಷ್ಠಾಪನೆಗೊಂಡದ್ದು. ಇವರು ಇದುವರೆಗೆ ಹತ್ತು ಕಾದಂಬರಿಗಳು, ಐವತ್ತಕ್ಕೂ ಹೆಚ್ಚು ಸಣ್ಣ ಕಥೆಗಳನ್ನು ರಚಿಸಿದ್ದಾರೆ. ಇವರ ಕಥೆ ಹಾಗೂ ಕಾದಂಬರಿಗಳಲ್ಲಿ ಯಥಾರ್ಥವಾದ ಸೆಳೆತವನ್ನು ಸ್ಪಷ್ಟವಾಗಿ ನೋಡಬಹುದು, ಅನುಭವಿಸಬಹುದು. ಶೀರ್ಷೇಂದುರವರ ಕಥೆಗಳಲ್ಲಿ ಅಸ್ಥಿರತೆಯನ್ನು ಕಾಣುವುದಿಲ್ಲ. ಒಂದು ತರಹ ಸ್ಥಿರ ವಿಶ್ವಾಸ ಹಾಗೂ ಆಸ್ತಿಕತೆಯ ಬೋಧನೆ ಇರುತ್ತದೆ. ಇವರು ಕಥೆಗಳಲ್ಲಿ ಆತ್ಮಕಥೆಯ ರೂಪ ನೀಡಿ ಇದೇ ಮಾಧ್ಯಮದಿಂದ ಮಾನವ ಜೀವನದ ಅಂತರ್ಯ ಮುಟ್ಟಲು ಪ್ರಯತ್ನಿಸುತ್ತಾರೆ.

***ದೇವೇಶ್ ರಾಯ್*** *(1936):* ದೇವೇಶ್ ರಾಯ್ ಜಲಪಾಇಗುಡಿಯಲ್ಲಿ ವಾಸಿಸುತ್ತಿದ್ದಾರೆ. ಇವರು ಬಾಂಗ್ಲಾ ಸಾಹಿತ್ಯದ ಅಧ್ಯಾಪಕರು. ಎಂಬತ್ತರ ದಶಕದ ಬಾಂಗ್ಲಾ ಸಣ್ಣಕಥೆಗಾರರ ಆಂದೋಲನದ ಪ್ರಮುಖ ನೇತಾರರು. ಬರವಣಿಗೆಯಲ್ಲಿ ಭಾಷಾ ಪ್ರಯೋಗಕ್ಕೆ ಇವರು ಹೆಚ್ಚಿನ ಆದ್ಯತೆ ನೀಡುತ್ತಾರೆ. ಇವರ ಪ್ರಥಮ ಕಥಾಸಂಕಲನ 'ದೇವೇಶ್ ರಾಯ್‌ರ್ ಗಲ್ಪ್' 1959ರಲ್ಲಿ ಪ್ರಕಟಗೊಂಡಿತ್ತು. ಇವರ ಪ್ರಥಮ ಕಾದಂಬರಿ 'ಯಯಾತಿ' 1972ರಲ್ಲಿ ಪ್ರಕಟಗೊಂಡಿತ್ತು. 'ದೇಶ್' ಪತ್ರಿಕೆಯಲ್ಲಿ ಪ್ರಕಟಗೊಂಡಿದ್ದ ಕಥೆ 'ಹಾಡ್‌ಕಾಟಾ' ಓದುಗರನ್ನು ಬಹಳ ಆಕರ್ಷಿಸಿತ್ತು. ಇವರು ಇನ್ನೂರಕ್ಕೂ ಹೆಚ್ಚು ಕಥೆಗಳನ್ನು ಬರೆದಿದ್ದಾರೆ.

*Printed at* Printsman, 18A/11, Doriwalan, New Delhi–110005